

# ಕರ್ನಾಟಕ  ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ :     25-03-2021                                        ಪ್ರಶ್ನೆ ಸಂಖ್ಯೆ :     1866 (2176)

ಸದಸ್ಯರ ಹೆಸರು ಮತ್ತು ಕ್ಷೇತ್ರ :     ಶ್ರೀ ಶಶೀಲ್ ಜಿ.ನಮೋಶಿ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ :     25-03-2021

ಉತ್ತರಿಸುವ ಸಚಿವರು:     ಯುವ ಸಬಲೀಕರಣ ಮತ್ತು ಕ್ರೀಡೆ ಹಾಗೂ ಯೋಜನಾ ಸಚಿವರು

ವಿಷಯ :     ಡಾ|| ಡಿ.ಎಂ.ನಂಜುಂಡಪ್ಪ ವರದಿಯ ಅನುಷ್ಠಾನ ಕುರಿತು

(ಅ) ಡಾ|| ಡಿ.ಎಂ. ನಂಜುಂಡಪ್ಪನವರ ವರದಿ ಅನುಷ್ಠಾನ ಅವಧಿ ಮುಗಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಡಾ|| ಡಿ.ಎಂ. ನಂಜುಂಡಪ್ಪನವರ ವರದಿ ಅನುಷ್ಠಾನದಿಂದ ರಾಜ್ಯದಲ್ಲಿ ಆಗಿರುವ ಪ್ರಾದೇಶಿಕ ಅಸಮಾನತೆಯ ಬದಲಾವಣೆಗಳೇನು ;

(ಆ) ಸದರಿ ವರದಿ ಅನುಷ್ಠಾನದಿಂದ ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆ ಸರಿಯಾಗಿದೆಯೇ; ಇಲ್ಲದಿದ್ದಲ್ಲಿ, ಸರ್ಕಾರ ಡಾ|| ಡಿ.ಎಂ. ನಂಜುಂಡಪ್ಪನವರ ವರದಿ ಅನುಷ್ಠಾನವನ್ನು ಮುಂದುವರೆಸಲು ಕೈಗೊಂಡಿರುವ ಕ್ರಮವೇನು ;

(ಇ) ಸದರಿ ವರದಿಯಂತೆ ರಾಜ್ಯದಲ್ಲಿ ವರದಿ ಅನುಷ್ಠಾನದಿಂದ ಎಷ್ಟು ಹಿಂದುಳಿದ ತಾಲ್ಲೂಕುಗಳು ಸಾಪೇಕ್ಷವಾಗಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳಾಗಿ ಬದಲಾವಣೆಯಾಗಿವೆ;

(ಈ) ರಾಜ್ಯದಲ್ಲಿ ಡಾ|| ಡಿ.ಎಂ. ನಂಜುಂಡಪ್ಪನವರ ಉನ್ನತಾಧಿಕಾರಿ ಸಮಿತಿಯ ರೀತಿ ಮೊತ್ತಮ್ಮೆ ಪ್ರಾದೇಶಿಕ ಅಸಮಾನತೆ ಅಧ್ಯಯನ ಮಾಡಲು ಉನ್ನತಾಧಿಕಾರಿ ಸಮಿತಿ ರಚಿಸಲು ಸರ್ಕಾರ ಯೋಚಿಸಿದೆಯೇ; ಮತ್ತೊಂದು ಸಮಿತಿ ರಚಿಸಲು ಸರ್ಕಾರಕ್ಕೆ ಇರುವ ತೊಡಕುಗಳೇನು ;

(ಉ) ಸದರಿ ವರದಿ ಅನುಷ್ಠಾನವನ್ನು 2007-2008ರಿಂದ ಇಲ್ಲಿಯವರೆಗೆ ಮಾಡಲಾಗುತ್ತಿದ್ದು, ವಿಶೇಷ ಅಭಿವೃದ್ಧಿ ಯೋಜನೆಯ ಅನುದಾನ ಹಂಚಿಕೆ, ಬಳಕೆ ಮಾಡಲಾಗಿದೆಯೇ? (ತಾಲ್ಲೂಕುವಾರು, ವರ್ಷವಾರು, ಇಲಾಖಾವಾರು ಮಾಹಿತಿ ನೀಡುವುದು)